ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಗುರುವಾರ, ದಿನಾಂಕ : 24 ನೇ ಸೆಪ್ಟೆಂಬರ್, 2020

ಬೆಳಗಾವಿಯ ಸುವರ್ಣ ಸೌಧ ಕಟ್ಟಡದ ಇಲಾಖೆಯನ್ನು ಸ್ಥಳಾಂತರಿಸುವ ಬಗ್ಗೆ

ಶ್ರೀ ನಸೀರ್ ಅಹ್ಮದ್(ವಿಧಾನಸಭೆಯಿಂದ ಚುನಾಯಿತರಾದವರು ) –

503 (638) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಉತ್ತರ ಕರ್ನಾಟಕದ ಅಭಿವೃದ್ಧಿಯ ಹಿತದೃಷ್ಟಿಯಿಂದ ಬೆಳಗಾವಿಯಲ್ಲಿ ನಿರ್ಮಿಸಿದ ಸುವರ್ಣ ಸೌಧದ ಕಟ್ಟಡಕ್ಕೆ ಕೆಲವೊಂದು ಇಲಾಖೆಗಳನ್ನು (ನೀರಾವರಿ, ಸಕ್ಕರೆ, ಶಿಕ್ಷಣ, ಉದ್ಯಮ ಹಾಗೂ ಸಮಾಜ ಕಲ್ಯಾಣ) ಮಂತ್ರಿಯಾದಿಯಾಗಿ ಸಂಪೂರ್ಣ ಸ್ಥಳಾಂತರ ಮಾಡುವ ವಿಚಾರ ಸರ್ಕಾರದ ಗಮನದಲ್ಲಿದೆಯೇ;

(ಆ) ಹಾಗಿದ್ದಲ್ಲಿ, ಇಲ್ಲಿಯವರೆಗೆ ಯಾವ ಯಾವ ಇಲಾಖೆಗಳನ್ನು ಸ್ಥಳಾಂತರ ಮಾಡಲಾಗಿದೆ;

(ಇ) ಉತ್ತರ ಕರ್ನಾಟಕ ಅಭಿವೃದ್ಧಿ ಹಿತದೃಷ್ಟಿಯಿಂದ ಅಲ್ಲಿಯ ಜನ ಸಾಮಾನ್ಯರಿಗೆ ಕಛೇರಿ ಕೆಲಸಕ್ಕೆ ಅನುಕೂಲವಾಗುವ ಸಲುವಾಗಿ ಹಾಗೂ ಸುವರ್ಣ ಸೌಧದ ಕಟ್ಟಡದ ಸದುಪಯೋಗ ಪಡೆಯಲು ಸರ್ಕಾರ ಕೈಗೊಂಡ ಕ್ರಮಗಳೇನು?